ಗುರುತು। ಕೊಡು ಕೊಡುತುಸಿರಿದಂತೆ ಹನುಮಂತ ।।1।। ಕಟಕಟನೆ ಹಲ್ಕಡಿದು ಕಲುಶ ದೈತ್ಯರನ್ನೆಲ್ಲ। ಚಟಚಟನೆ ಸೀಳಿ ಸಂಭ್ರಮದಿಂದಲಿ। ಮಿಟಮಿಟನೆ ಕಣ್ ಬಿಡುತ ಬಿಂಕದಲಿ ಲಂಕೆಯನು। ಸುರಸುರನೆ ಬಾಲದಲಿ ಸುಟ್ಟ ಬಲು ದಿಟ್ಟ।।2।। ಫಳಫಳನೆ ಆರ್ಭಟದಿಂದಲೇ ರಾವಣನ। ನಳನಳನೆ ಬೆಳೆದ ನಂದನ ವನವ ಕಿತ್ತು। ಥೊಳಥೊಳನೆ ನಗುತ ದಶ ಕಂದರನ ಗುದ್ದಿ ಬಂದ। ಭಳಿಭಳಿರೆ ಹಯವದನ ದಾಸ ನಿರ್ದೋಷ।।3।।

**ಗೆದ್ದೆಯೋ ಹನುಮಂತ ಅಸುರರ** **ರಾಗ: ಪೂರ್ವಿಕಲ್ಯಾಣಿ**

ಗೆದ್ದೆಯೋ ಹನುಮಂತ ಅಸುರರ ಒದ್ದೆಯೋ ಹನುಮಂತ। ಅಂಜನಾ ಸುತನೀತ ಲಂಕಾಪುರದಿ। ಅಕ್ಷಯನ ಕೊಂದಾತಾ।।ಪ।। ಕಂಜಾಕ್ಷಿ ಸೀತೆಗೆ ಮುದ್ರಿಕೆಯಿತ್ತು। ಮಂಜುಳ ವಾರ್ತೆಯ ತಂದ ರಾಮನ ದೂತ।।ಅ.ಪ।। ಈರೇಳು ಲೋಕದೊಳು ಇನ್ನೇನು ಮತ್ತೇನು। ಯಾರು ನಿನಗೆ ಪರಿಯು।। ವೀರಪರಾಕ್ರಮ ಮಹಾಬಲವಂತ। ಧೀರ ಸಮೀರ ಉದಾರ ಗಂಭೀರಾ।।1।। ವಾಂಛಿತ ಫಲಗಳ ಕೊಡುವನಾದ। ಮುಖ್ಯಪ್ರಾಣ ಮಹಾನುಭಾವ।। ಕಿಂಚಿತ್ ಕಷ್ಟವ ಪಡಿಸಲೀಸದೆ ಭಕ್ತರ್ಗೆ। ಕಂಚಿವರದ ಪುರಂದರವಿಠಲನ ದಾಸ।।2।।

**ಜನುಮ ಜನುಮದಲಿ ಎನಗಿರಲಿ** **ರಾಗ: ಷಣ್ಮುಖಪ್ರಿಯ, ಆದಿತಾಳ**

ಜನುಮ ಜನುಮದಲಿ ಎನಗಿರಲಿ।।ಪ।। ಹನುಮಭೀಮ ಮಧ್ವ ಮುನಿಗಳ ಸೇವೆಯು।।ಅಪ।। ಮಾತರೇಶ್ವರ ನೀ ಪ್ರೀತನಾಗೆ ಅಜ। ತಾತನು ಸುಲಭದಿ ಒಲಿಯುವನು। ಕೋತಿಯ ರೂಪದಿ ಭೂತಲದಿ ಬಲು। ಖ್ಯಾತಿ ಪಡೆದ ರಾಮ ಧೂತರ ಸೇವೆಯು।।1।। ಹರನ ಭಕುತ ಜರಾಸಂಧನ ಕಾಯವ। ಹರಿದು ಮುರಿದು ಬಲು ಸುಲಭದಲಿ। ಹರಿಗೆ ಪರೋಕ್ಷದಿ ಅರ್ಪಣೆ ಮಾಡಿದ ಕುರು ಕುಲಪತಿ ಬಲಭೀಮರ ಸೇವೆಯು।।2।। ಶುದ್ಧ ದ್ವಿಜ ಕುಲದಿ ಉದ್ಭವಿಸುತ। ಅನಿರುದ್ಧ ನಿಗನುಮತವಾಗಿರುವ। ಸಿದ್ಧಾಂತದ ಪದ್ಧತಿಯನು ತೋರಿದ। ಮಧ್ವಮತದ ತತ್ವದಲೀ ಪ್ರಸನ್ನತೆ।।3।।

**ಪವಮಾನ2 ಜಗದ ಪ್ರಾಣ** **ರಾಗ: ಮಧ್ಯಮಾವತಿ**

ಪವಮಾನ ಪವಮಾನ ಜಗದ ಪ್ರಾಣ। ಸಂಕರುಷಭವ ಭವಭಯಾರಣ್ಯ ದಹನಾ।।ಪ।। ಶ್ರವಣವೆ ಮೊದಲಾದ ನವವಿಧ ಭಕುತಿಯ। ತವಕದಿಂದಲಿ ಕೊಡು ಕವಿಜನ ಪ್ರಿಯ।।ಅ.ಪ.।। ಹೇಮ ಕಚ್ಛುಟ ಉಪವೀತ ಧರಿಪ ಮಾರುತ, ಕಾಮಾದಿ ವರ್ಗರಹಿತ। ವ್ಯೋಮಾದಿ ಸರ್ವ ವ್ಯಾಪುತಚ್ಛು ಸತತ ನಿರ್ಭೀತಾ ರಾಮಚಂದ್ರನ ನಿಜದೂತಾ।। ಯಾಮಯಾಮಕೆ ನಿನ್ನ ನಾಮಾಮೃತದೆಡೆ ಕಾಮಿಪೆ ಎನಗಿದೆ ನೇಮಿಸು ಪ್ರತಿದಿನ ಈ ಮನಸಿಗೆ ಸುಖಸ್ತೋಮವ ತೋರುತ ಪಾಮರಮತಿಯನು ನೀ ಮಾಣಿಪುದು।।1।। ವಜ್ರಶರೀರ ಗಂಭೀರ ಮುಕುಟಧರ ದುರ್ಜನವನಕುಠಾರ ನಿರ್ಜರ ಮಣಿ ದಯಾಪಾರಾವಾರ ಉದಾರಾ। ಸಜ್ಜನರಘಪರಿಹಾರಾ। ಅರ್ಜುನಗೊಲಿದಂದು ಧ್ವಜವೆನಿಸಿ ನೀನಿಂದು ಮೂರ್ಜಗವರಿವಂತೆ ಗರ್ಜನೆ ಮಾಡಿದೆ। ಹೆಜ್ಜೆಹೆಜ್ಜೆಗೆ ನಿನ್ನಬ್ಜ ಪಾದದಧೂಳಿ ಮಜ್ಜನದಲಿ ಭವವರ್ಜಿತ ನೆನಿಸೋ ।।2।। ಪ್ರಾಣಾಪಾನ, ವ್ಯಾನೋದಾನ। ಸಮಾನ ಆನಂದ ಭಾರತೀರಮಣ। ನೀನೆ ಸರ್ವದಾ ಗೀರ್ವಾಣಾದ್ಯರಿಗೆ ಜ್ಞಾನ। ಧ್ಯಾನಪಾಲಿಪ ವರೇಣ್ಯ।। ನಾನು ನಿರುತದಲಿ ಏನೆಸಗಿದ ಮಾನಸಾದಿ ಕರ್ಮ ನಿನಗೊಪ್ಪಿಸಿದೆನೋ ಪ್ರಾಣನಾಥ ಸತ್ಯ ವಿಜಯವಿಠ್ಠಲನ। ಕಾಣಿಸಿಕೊಡುವುದು ಭಾನುಪ್ರಕಾಶ।।3।।

**ಬೆಟ್ಟವಿಳಿದು ಬೇಗ ಬಾರೋ ಜಗಜಟ್ಟಿಗ ಹನುಮ**

ಬೆಟ್ಟವಿಳಿದು ಬೇಗ ಬಾರೋ ಜಗಜಟ್ಟಿಗ ಹನುಮ ನಿಮಗೆ ಸಮವ್ಯಾರೋ.... ಕರುಣಾವ ಬೀರೋ ಚರಣಾವ ತೋರೋ।।1।। ದುಷ್ಟದಶಕಂಠನ ಪಟ್ಟಣದೋಳ್ ರಾಮನಾ ಇಷ್ಟ ಸತೀಗೆ ನೀ ಕೊಟ್ಟೆ ಯುಂಗುರವಾ ತಾಳೀದೆ ಮುದವಾ ಆರುಹೀದೆ ಹಿತವಾ...।।2।। ರಣರಂಗದೊಳಗೆ ರಾವಣನ ಗುದ್ದಿದ ಶೂರ ಭರದಿ ಲಕ್ಷ್ಮಣಗೆ ಪ್ರಾಣವನಿತ್ತ ಧೀರ ವಾಯುಕುಮಾರ ವಜ್ರಶರೀರ...।।3।। ನರಸಿಂಹವಿಠಲ ದೊರೆ ನಿನ್ನ ಕರೆದರೆ ಘೋರ ರೂಪಗಳ ತೋರುವರೇನೊ ಎನಗೆ ನಿಲ್ಲದೆ ಬಾರೋ ಮನೆಗೆ ಸಲ್ಲದು ಬೆಟ್ಟದೊಳಗೆ।।4।।

**ಭಾರತೀಶ ಮದ್ಭಾರ ನಿನ್ನದಯ್ಯ** **ರಾಗ:ಪೂರ್ವಿಕಲ್ಯಾಣಿ**

ಭಾರತೀಶ ಮದ್ಭಾರ ನಿನ್ನದಯ್ಯ। ಕರುಣದಿ ಪಿಡಿಕಯ್ಯ।।ಪ।। ಪೂರೈಸೆನ್ನ ಮನೋಭಿಲಾಷೆಗುರುವೆ।। ಆಶ್ರಿತ ಸುರತರುವೇ।।ಅ.ಪ.।। ಹರಿಭಕ್ತಾಗ್ರೇಸರನೇ ಹನುಮಂತಾ। ಹರನುತ ಬಲವಂತಾ। ತರಣಿ ಕುಲಜ ಶ್ರೀರಾಮನಾಜ್ಞ ದಿಂದ। ಬಹುಸನ್ಮುದದಿಂದಾ। ಶರಧಿದಾಟಿ ಸೀತಾಕೃತಿತಾನೋಡಿ। ವನದೊಳಗೋಡ್ಯಾಡೀ। ದುರುಳ ರಾಕ್ಷಸ ಪುರವಸಖನಿಗಿತ್ತಾ। ಲೋಕೈಕ ಸಮರ್ಥಾ।।1।। ಕುಂತಿ ಜಠರಾಂಭೋನಿಧಿ ಚಂದಿರನೇ। ರಾಜಾಗ್ರೇಸರನೇ। ಕಂತುಜನಕ ನಿಚ್ಛಾನುಸಾರವಾಗಿ। ರಣದಲಿ ಚೆನ್ನಾಗಿ। ನಿಂತುದುಷ್ಟದುರ್ಯೋಧನಾದಿಗಳನೂ। ಸಂಹರಿಸಿದೆನೀನೂ। ಭ್ರಾಂತ ಜನರೇನು ಬಲ್ಲರಯ್ಯಾ ನಿನ್ನ। ಬಹುಗುಣಸಂಪನ್ನಾ।।2।। ನಡುಮನೆಯೆಂಬೋಬ್ರಾಹ್ಮಣನಾ ಮನೆಯಲಿ। ಅವತರಿಸಿದೆ ಮುದದಲ್ಲಿ। ಮೃಡಸರ್ವೋತ್ತಮ ಹರಿಯೆತಾನೆಂದು। ವಿಶ್ವಂ ಮಿಥ್ಯವೆಂದೂ। ನುಡಿವ ಜನರುಗಳ ಮತಗಳನೆ ನಿರಾಕರಿಸಿ। ಸಚ್ಛಾಸ್ತ್ರ ರಚಿಸಿ। ಒಡೆಯ ತಂದೆ ಶ್ರೀಪತಿ ವಿಠಲನ್ನಾ। ಪೂಜಿಪರಘನ್ನಾ।।3।।

**ಭಾರವೇ ಭಾರತಿರಮಣಾ** **ರಾಗ: ಷಣ್ಮುಖಪ್ರಿಯ**

ಭಾರವೇ ಭಾರತಿರಮಣಾ। ನಿನಗೇ ನಾ ಭಾರವೇ ಭಾರತಿ ರಮಣಾ।।ಪ।। ಲಂಕಾನಾಥನಾ ಬಿಂಕವ ಮುರಿದೂ। ಅಕಳಂಕ ಚರಿತನಾ ಕಿಂಕರನೆನಿಸಿದೆ। ಪಂಕಜಾಕ್ಷಿಗೇ ಅಂಕಿತದುಂಗುರವಿತ್ತೆ। ಶಂಕೆ ಇಲ್ಲದೆ ನೀ ಲಂಕೆಯ ದಹಿಸಿದೆ।।1।। ಸೋಮಕುಲದಿ ನಿಸ್ಸೀಮ ಮಹಿಮನೆನಿಸಿ। ತಾಮಸ ಬಕನಾ ನಿರ್ಧೂಮವ ಮಾಡಿದೆ। ಕಾಮಿನಿ ಮೋಹಿಸೆ ಪ್ರೇಮದಿ ಸಲಹಿದೆ। ತಾಮರಸಾಕ್ಷರ ಸೇವೆಯ ಮಾಡಿದೆ।।2।। ವೇದವ್ಯಾಸರಾ ಪೂಜೆಯ ಮಾಡಿ। ಮೋದದಿಂದ ಬಹು ವಾದ ಗಳಾಡಿದೆ। ಅಧಮ ಶಾಸ್ತ್ರಗಳ ಹೋಮವ ಮಾಡಿ। ಮದರಿಪು ವಿಜಯವಿಠಲಗರ್ಪಿಸಿದೆ।।3।।

**ಮುಖ್ಯಪ್ರಾಣನೇ ಎನ್ನ ಸಖ್ಯನಲ್ಲವೇ** **ರಾಗ: ಆರಭಿ**

ಮುಖ್ಯಪ್ರಾಣನೇ ಎನ್ನ ಸಖ್ಯನಲ್ಲವೇ। ಮಿಕ್ಕದಾದ ರಕ್ಕಸರ ಸೊಕ್ಕು ಮುರಿದನೆ।।ಪ।। ರಾಮದೂತನೆ ನೀ ಕಾಮ ರೂಪನೆ ಸ್ವಾಮಿ ಸೀತಾ ರಾಮರ ಪ್ರೇಮ ಶಿಷ್ಯನೆ।।1।। ಅಕ್ಷಯಕುಮಾರನ ಶಿಕ್ಷಿಸಿದನೆ ಲಕ್ಷವಿಲ್ಲದೆ ವೃಕ್ಷಗಳ ಕಿತ್ತಿ ಒಗೆದನೆ।।2।। ಕೋತಿ ರಾಯನೆ ನೀತಿವಂತನೆ। ಸೀತೆ ಗುಂಗುರ ಕೊಟ್ಟು ಬಲು ಖ್ಯಾತಿ ಪಡೆದನೆ।।3।। ಕಾಶ್ಯಪರೊಳು ವಾಸವಾದನೆ। ಈಶ ವೆಂಕಟೇಶ ವಿಠಲ ದಾಸನಲ್ಲವೆ।।4।।

**ಸ್ವಾಮಿ ಮುಖ್ಯ ಪ್ರಾಣ ನೀ ಮಲೆವರ** **ರಾಗ: ಸುರುಟಿ**

ಸ್ವಾಮಿ ಮುಖ್ಯ ಪ್ರಾಣ। ನೀ ಮಲೆವರ ಗಂಟಲಗಾಣ।।ಪ।। ಸಕಲ ವಿದ್ಯಾಪ್ರವೀಣ ನೀ ಹಿಡಿದೆಯೋ ರಾಮರ ಚರಣ।।ಅ.ಪ.।। ಏಕಾದಶೀಯ ರುದ್ರ ನೀ ಹಿಡಿದೆಯೋ ರಾಮರ ಮುದ್ರ। ಸೇತುವೆಗಟ್ಟಿ ಸಮುದ್ರ ನೀ ಹಾರಿದೆಯೋ ಬಲಭದ್ರ।।1।। ಸಂಜೀವಿನಿ ಪರ್ವತವನ್ನು ಅಂಜದೆ ತಂದೆಯೋ ನೀನು। ಅಂಜನೆತನುಸಂಭವನು ನಿನ್ನ ಬೇಡಿಕೊಂಬೆನೊ ನಾನು।।2।। ವೈಕುಂಠಸ್ಥಳದಿಂದ ಬಂದು ಪಂಪಾಕ್ಷೇತ್ರದಿ ನಿಂದು। ಮಂತ್ರೋದ್ಧಾರಕನೆಂದು ಪುರಂದರವಿಠಲನೆ ಸಲಹೆಂದು।।3।।

**ಸಂಜೀವರಾಯನ ಕ್ಷೇತ್ರವ ಕಂಡೆ** **ರಾಗ: ಮಾಂಡ್**

ಸಂಜೀವರಾಯನ ಕ್ಷೇತ್ರವ ಕಂಡೆ। ಬೃಹದಾಕಾರದ ಹನುಮನ ಕಂಡೆ।।ಪ।। ತೇಜದಿ ಹೊಳೆವ ಮುಖವನು ಕಂಡೆ। ಭಕ್ತಿಭಾವವನು ನಯನದೊಳ್ ಕಂಡೆ। ರಾಮರಾಯನನು ಹೃದಯದಿ ಕಂಡೆ। ಬಗಲಲಿ ಸೀತಾಮಾಯಿಯ ಕಂಡೆ।।1।। ಕೋದಂಡ ಪಿಡಿದ ರಾಮನ ಕಂಡೆ। ಮಂದಸ್ಮಿತಳಾದ ಸೀತೆಯ ಕಂಡೆ। ನೀಡಿದ ಅಭಯ ಹಸ್ತವನು ಕಂಡೆ। ಮನದೊಳು ಶಾಂತಿಯಿಂ ನಾ ಮುದಗೊಂಡೆ।।2।। ವಜ್ರಕಾಯನ ನಿಲುವನು ಕಂಡೆ। ಚರಣವು ಭುವಿಯ ಮೆಟ್ಟಿಹ ಕಂಡೆ। ಬೆಳಗುವ ಶಿರವ ಗಗನದಿ ಕಂಡೆ। ಕೈಯಲಿ ಸಂಜೀವ ಪರ್ವತ ಕಂಡೆ।।3।। ಹನುಮನ ಪಾದಕೆ ನಮಿಸುತ ನಿಂದೆ। ತನುಮನವೆಲ್ಲ ಅರ್ಪಿತವೆಂದೆ। ನಿನ್ನಾನುಗ್ರಹ ಕರುಣಿಸು ಎಂದೆ। ಚೈತನ್ಯದಾಸನ ನೀ ಪೊರೆ ಎಂದೆ।।4।।

**ಹನುಮ ನಮ್ಮ ತಾಯಿತಂದೆ** **ರಾಗ: ಮೋಹನ, ಆದಿತಾಳ**

ಹನುಮ ನಮ್ಮ ತಾಯಿತಂದೆ ಭೀಮ ನಮ್ಮ ಬಂಧುಬಳಗ। ಆನಂದತೀರ್ಥರೇ ನಮ್ಮ ಗತಿಗೋತ್ರವಯ್ಯ॥ಪ॥ ತಾಯಿತಂದೆ ಹಸುಳೆಗೆ ಸಹಾಯಮಾಡಿ ಸಾಕುವಂತೆ। ಆಯಾಸವಿಲ್ಲದೆ ಸಂಜೀವನವ ತಂದೆ। ಗಾಯಗೊಂಡ ಕಪಿಗಳನ್ನು ಸಾಯದಂತೆ ಪೊರೆದ ರಘು। ರಾಮನಂಘ್ರಿಗಳೇ ಸಾಕ್ಷಿ ತ್ರೇತಾಯುಗದಿ॥1॥ ಬಂಧುಬಳಗದಂತೆ ಆಪದ್ಬಾಂಧವನಾಗಿ ಪಾರ್ಥನಿಗೆ। ಬಂದ ಬಂದ ದುರಿತಗಳ ಪರಿಹರಿಸಿ। ಅಂಧಕಜಾತರ ಕೊಂದು ನಂದಕಂದಾರ್ಪಣೆಂದ। ಗೋವಿಂದನಂಘ್ರಿಗಳೇ ಸಾಕ್ಷಿ ದ್ವಾಪರಯುಗದಿ॥2॥ ಗತಿಗೋತ್ರರಂತೆ ಸಾಧುಯತಿಗಳಿಗೆ ಮತಿಯ ತೋರಿ। ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ। ಗತಿಗೆಟ್ಟ ಸದ್ವೈಷ್ಣವರಿಗೆ ಸದ್ಗತಿಯ ತೋರಿದೆ। ಪರಮಾತ್ಮ ಗತಿ ಪುರಂದರವಿಠಲನೆ ಸಾಕ್ಷಿ ಕಲಿಯುಗದಲ್ಲಿ॥3॥

**ಹನುಮಂತ ದೇವ ನಮೋ** **ರಾಗ: ಪೂರ್ವಿಕಲ್ಯಾಣಿ, ಆದಿತಾಳ**

ಹನುಮಂತ ದೇವ ನಮೋ॥ಪ॥ ವನಧಿಯನು ದಾಟಿ ದಾನವರ ದಂಡಿಸಿದ ॥ಅ॥ ಅಂಜನೇಯ ಗರ್ಭ ಪುಣ್ಯೋದಯನೆಂದೆನಿಪೆ। ಕಂಜಸಖ ಮಂಡಲಕೆ ಕೈ ದುಡುಕಿದೆ। ಭುಂಜಿಸಿ ಇರಲು ಜನಂಗಳನು ನಡುಗಿಸಿದೆ। ಭಂಜರತ್ನಕ ನಿನಗೆ ಸರಿಯಾರು ಗುರುವೆ॥1॥ ಹೇಮ ಕುಂಡಲ ಹೇಮಯಜ್ಞೋಪವೀತಧರ। ಕಟಿಸೂತ್ರ ಕೌಪೀನವನು ಧರಿಸಿ ರೋಮರೋಮಕೆ ಕೋಟಿಲಿಂಗ ಸರ್ವಾಂಗ ರಾಮಭೃತ್ಯನು ನಿನಗೆ ಸರಿಯಾರು ಗುರುವೆ॥2॥ ಅಕ್ಷಯಕುಮಾರನ ಧಿಕ್ಕರಿಸಿಬಿಟ್ಟೆ ನೀ ರಾಕ್ಷಸರೊಳಗಧಿಕ ರಾವಣನ ರಣದಲ್ಲಿ। ವಕ್ಷಸ್ಥಳ ಒಡೆದು ಮೂರ್ಛಿಸಿ ಬಿಸಾಟೆ ತ್ರಿಜಗರಕ್ಷಕನಶಿಕ್ಷಕ ಶ್ರೀರಾಮದಳರಕ್ಷ॥3॥ ರಾಮಲಕ್ಷ್ಮಣರ ಕಟ್ಟಾಳಾಗಿ ನೀ ನಡೆದೆ। ಭೂಮಿಜೆಗೆ ಮುದ್ರೆಯುಂಗುರವನಿತ್ತೆ। ಆ ಮಹಾಲಂಕೆನಗರವನ್ನೆಲ್ಲವನು ನೀ। ಧೂಮಧಾಮವ ಮಾಡಿ ಮೆರೆದೆ ಮಹಾತ್ಮ॥4॥ ಶ್ರೀಮಧ್ವಾಚಾರ್ಯರ ಪುರಪತಿಯೆಂದೆನಿಪ। ಶ್ರೀ ಮಹಾಲಕುಮಿ ನಾರಾಯಣ ರೂಪ। ಶ್ರೀಮನೋಹರ ಪುರಂದರವಿಠಲನದಾಸ। ಪ್ರೇಮದಾಳು ಹನುಮಂತ ಬಲವಂತ॥5॥

**ಹನುಮನ ಮತವೇ ಹರಿಯ ಮತವೊ** **ರಾಗ: ಖರಹರಪ್ರಿಯ, ಆದಿತಾಳ**

ಹನುಮನ ಮತವೇ ಹರಿಯ ಮತವೊ॥ಪ॥ ಹರಿಯ ಮತವೆ ಹನುಮನ ಮತವೊ॥ಅ.ಪ.॥ ಹನುಮನ ನಂಬಿದ ಸುಗ್ರೀವ ಗೆದ್ದ। ಹನುಮನ ನಂಬದ ವಾಲಿಯು ಬಿದ್ದ॥1॥ ಹನುಮನ ನಂಬಿದ ವಿಭೀಷಣ ಗೆದ್ದ। ಹನುಮನ ನಂಬದ ರಾವಣ ಬಿದ್ದ॥2॥ ಹನುಮ ಪುರಂದರವಿಠಲನ ದಾಸ। ಪುರಂದರವಿಠಲನು ಹನುಮನೋಳ್ವಾಸ॥3॥

**ಹರಿಯ ಬಿಟ್ಟರೆ ಗತಿಯಿಲ್ಲ** **ರಾಗ: ಕಾಪಿ, ಆದಿತಾಳ**

ಹರಿಯ ಬಿಟ್ಟರೆ ಗತಿಯಿಲ್ಲ ಮಾರುತಿ ಮರೆತಗೆ ಸಾಧನವಿಲ್ಲ॥ಪ॥ ಹರಿ ಒಲಿದವರಿಗೆ ಹನುಮ ಒಲಿವ। ಹನುಮ ಒಲಿಯದಿರೆ ಹರಿ ಒಲಿಯಲೊಲ್ಲ। ಹರಿಸಂಕಲ್ಪವೆಲ್ಲ ಹನುಮ ಬಲ್ಲ। ಹನುಮ ಬಿಟ್ಟುದನು ಹರಿ ತಾನೊಲ್ಲ॥1॥ ಮೂರವತಾರದಿ ಬಂದು। ಮುಕ್ತಿ ದಾರಿಗಳೆಲ್ಲ ತೋರಿದ ನಿಂದು। ಸಾರಿ ಜನರಿಗೆ ಅಂದು। ಮುಕ್ತಿ ಸೇರೋ ಮಾರ್ಗವ ತೋರಿದ ನಿಂದು॥2॥ ಶತಕಲ್ಪಗಳಲಿ ಸದಾ ಈತ। ಹಂಸ ಮಂತ್ರಗಳೆಲ್ಲ ಜಪಿಸುವ ಖ್ಯಾತ। ತತ್ವೇಶ್ವರಿಗನುಕೂಲನೀತ। ಗುರು ಪುರಂದರ ವಿಠಲನ ನಿಜದೂತ॥2॥

## ಭಕ್ತಿಗೀತೆ

**ಆಂಜನೇಯ ನಾಮಪ್ರಭಾವಂ** **ರಾಗ: ಪುನ್ನಾಗವರಾಳಿ, ಆದಿತಾಳ**

ಆಂಜನೇಯ ನಾಮಪ್ರಭಾವಂ ಅದ್ಭುತ ವೈಭೋಗಂ॥ಪ॥ ರಾಮಪಾದ ಚರಣಾನಂದಂ ರಾಮನಾಮ ಪಾನಾಮೃತ

ಜೀವಂ।।1।। ಸಾಮಗಾನವೇದ ಕಲಾಸಾಗರಂ। ಕೋಟಿಸೂರ್ಯ ಪ್ರಕಾಶ ಸ್ವರೂಪಂ ಅಂಜನಾ ಪುತ್ರಂ।।2।। ಸುಗ್ರೀವ ಮಿತ್ರಂ ವಿಶ್ವರೂಪಂ ದಶಮುಖ ಮರ್ದನಂ। ಪಾರಿಜಾತ ತರುನಿವಾಸಂ ಸೀತಾರಾಮ ದಾಸ ಮಿತ್ರಂ।।3।।

**ಆಂಜನೇಯ ಹನುಮಂತಾ** **ರಾಗ : ಸಿಂಧುಭೈರವಿ, ತ್ರಿತಾಳ**

ಆಂಜನೇಯ ಹನುಮಂತಾ। ಶ್ರೀರಾಮ ಚಂದ್ರನ ಸದ್ಭಕ್ತ। ವಾಯುಪುತ್ರ ಸುಚರಿತ್ರ। ಭಾವಿವಿರಚಿತ ಸುಪವಿತ್ರ।।ಪ।। ಸುಗ್ರೀವಸಖ ರಘುರಾಮದೂತ। ಶರಧಿಲಂಘಿಸಿದ ಬಹು ಬಲವಂತಾ। ಜನನಿಗುಂಗುರವನಿತ್ತ ಸದ್ಭಕ್ತಾ। ರಾವಣ ವಿರೋಧಿ ಸರ್ವಶಕ್ತ।।1।। ರಾಮನಾಮವನು ಪಾವನಗೈವಾ। ರಾಮಚರಣದ ಸೇವೆಯಗೈವಾ। ರಾಮಾಯಣ ಕಥೆ ಶ್ರವಣಿಸುವಾ। ಭಕ್ತಜನಕೆ ಸುಖ ಕರುಣಿಸುವಾ।।2।। ಭಾಸುರ ತೇಜನೆ ಹನುಮಂತಾ। ಕ್ಲೇಶ ಹರಿಸು ಪ್ರಭು ಹನುಮಂತಾ। ದಾಶರಥಿಯ ದೂತ ಹನುಮಂತಾ। ದಾಸಕೇಶವನುತ ಹನುಮಂತಾ।।3।।

**ಆಂಜನೇಯನೆ ಉಂದನ್ (ತಮಿಳು)** **ರಾಗ: ಸುರುಟಿ–ರೂಪಕತಾಳ**

ಆಂಜನೇಯನೆ ಉಂದನ್ ಪಾದಕಮಲಮೇ ಶರಣಂ ಶರಣಂ।।ಪ।। ಅಂಜನಾದೇವಿಯಿನ್ ಅರುಳ್ ತವಪುದಲ್ವಾ। ಅನ್ನೈ ಸೀತಾದೇವಿಯಿನ್ ಅರುಳ್‌ಪೆಟ್ರ ಧೀರನೆ।।ಅ.ಪ.।। ರಾಮ ರಾಮ ಎನ್ನುಂ ತಾರಕ ಮಂತಿರತ್ತೈ। ಸದಾಜಪಿತ್ತಿಡುಂ ಶೀಲನೆ। ರಾಮನಾಮತ್ತೈ ಭಜಿತ್ತಿಡುವೋರ್ಕು ನವಗ್ರಹದೋಷತ್ತೈ ವಿಲೈಕ್ಕಿಡುವಾಯ್। ಕಲಿಯುಗತ್ತಿನಿಲೇ ಕಣ್‌ಕಂಡ ದೈವಮಾಯ್। ಕಾತ್ತಿಡುಂ ಪಾಟಲೀಶ್ವರ ರೂಪನೆ।।ಚರಣ।।

**ಈತನೀಗ ಹುಚ್ಚುರಾಯನು** **ರಾಗ: ಕಲ್ಯಾಣಿ**

ಈತನೀಗ ಹುಚ್ಚುರಾಯನು। ಈತನೀಗ ಹುಚ್ಚುರಾಯನೂ।।ಪ।। ಈತನೀಗ ಹುಚ್ಚುರಾಯ ಈ ಸಮರ್ಥಭುವನಾಧೀಶಾ। ಸ್ವಾಮಿಸೀತಾ ರಾಮರದೂತಾ। ಶ್ರೀಕರೀಪುರನಿವಾಸಮಾರುತಿ।।ಪ।। ತ್ರೇತಮಹಾಯುಗದಲ್ಲಿ। ಸೀತಾರಾಮರ ದೂತನಾಗಿ, ಸೀತೆಕದ್ದ ಖಲನ ಸದೆದು। ಸೀತೆಗುಂಗುರ ವಿತ್ತಾಮಾರುತಿ।।1।।ದ್ವಾಪರಂತ್ಯದಲ್ಲಿ ಬಂದು ಕೃಷ್ಣನಂಘ್ರಿಗೆರಗಿನಿಂದು। ಪಾಪಿಕೌರವರಕೊಂದು। ದ್ರುಪದಿಪಂಥ। ವೆಸಗಿದಾತ।।2।। ಕಲಿಯುಗದಲ್ಲಿ ಜನಿಸಿ। ಕಲ ಯಮದನವನ್ನೇ ಕಲಕಿ। ಕಲಿಕುಲಾಂತಕ ಮಧ್ವರಾಯರಾ ಈಶನಂಘ್ರಿ ಪಾದದಾಸ।।3।।

**ಏಕೆ ದಯವನು ತೋರೆ ವೀರಾಂಜನೇಯ** **ರಾಗ: ಮೋಹನ, ಆದಿತಾಳ**

ಏಕೆ ದಯವನು ತೋರೆ ವೀರಾಂಜನೇಯ। ನಿನ್ನನ್ನೇ ಬೇಡುತಿಹೆ ಅನುದಿನವು ನಾನು।।ಪ।। ರಾಮನಾ ಭಕ್ತನಾಗಿ ರಾಮಧ್ಯಾನವ ಮಾಡಿ। ರಾಮನಾಮವ ಜಪಿಸಿ ರಾಮನಿಗೆ ಭಂಟನಾದೆ। ಈ ರೀತಿಯಲಿ ಜಗಕೆ ರಾಮ ಮಹಿಮೆಯ ತೋರಿ। ಎಲ್ಲರನು ಸಲಹುವ ವೀರಾಂಜನೇಯ।।1।। ರಾಮನಾ ವ್ಯಥೆ ಕೇಳಿ ಲಂಕೆಗೆ ನೀ ಹಾರಿ। ಅಶೋಕ ವನದಲ್ಲಿ ಸೀತೆಯನು ನೀ ಕಂಡೆ। ರಾಮನಾ ಕಥೆ ಹೇಳಿ ಸೀತೆಗುಂಗುರವಿತ್ತು। ಲಂಕೆಯನು ನೀ ದಹಿಸಿ ರಾಮನಿಗೆ ಮಣಿಕೊಟ್ಟೆ।।2।। ರಾಮನಾಮದ ಕಲ್ಲಲಿ ಸೇತುವೆಯ ನೀ ಕಟ್ಟಿ। ರಾಮ ಲಕ್ಷ್ಮಣರನ್ನು ಸೇತುವೆಯ ದಾಟಿಸಿದೆ। ರಾಮನಾ ಜತೆಗೂಡಿ ರಾವಣನ ಶಿರವ ತರಿದು। ಸೀತೆಯನು ನೀ ತಂದು ರಾಮನಿಗೆ ಅರ್ಪಿಸಿದೆ।।3।। ವಿಭೀಷಣನಿಗೆ ಪಟ್ಟಗಟ್ಟಿ ಎಲ್ಲರಯೋಧ್ಯೆಯ ತಲುಪಿ। ಶ್ರೀರಾಮ ಪಟ್ಟದಲಿ ಮನದಣಿಯ ನೀ ಕಂಡೆ। ಆ ಸಮಯದಲಿ ರಾಮ ನಿನಗೆ ಚಂದ್ರಹಾರ ಕೊಡಲು ನಿನ್ನ ಎದೆಯನು ಸೀಳಿ ಕುಕ್ಕೆಸ್ವಾಮಿ ರೂಪದಲಿ ರಾಮನ ತೋರಿದೆ।।4।।

**ಕೊಡು ಸುಜ್ಞಾನವನು ಮಾರುತಿ**

ಕೊಡುವ ಸುಜ್ಞಾನವನು ಮಾರುತಿ। ತಡಮಾಡದೆ ನೀನು। ಒಡೆಯ ಶ್ರೀರಾಮರ ಆಡಿ ನಾ। ನಂಬಿದೆ ಬಿಡದೆ ನಿರಂತರ।।ಪ।। ಶತಯೋಜನದಗಲಾ। ಶರಧಿ ನೀನತಿವೇಗದಿದಾಟಿ। ವಸುಧೆಸುತೆಯ ಕಂಡುಂಗುರ ಕೊಟ್ಟು। ದಶಕಂಠನಪುರ ದಹಿಸಿದ ಹನುಮನೆ।।1।। ಸೋಮಕುಲದಿ ಜನಿಸಿ ಭೂಮಿಪ। ಧರ್ಮಜನಿಗನುಜನೆನಿಸಿ।

ಕಾಮಿನಿದ್ರೌಪದಿಗಾಗಿ ಕೀಚಕನಾ। ಮಾಣದೆಕೊಂದೆ ಶ್ರೀ ಭೀಮಾಶಯಾ ಬೇಗ॥2॥ ಅದ್ವೈತರನ್ನೆಲ್ಲಾ ಗೆಲಿದು। ಶ್ರೀಮಧ್ವಾಚಾರ್ಯರ ಜಯಿಸಿ। ಮುದ್ದು ಶ್ರೀ ಗೋಪಾಲಕೃಷ್ಣನೆ। ದೊಡ್ಡಬದರಿ ಶ್ರೀ ಮದ್ವ ಮುನೀಂದ್ರರೆ॥3॥

### ದೀನೋದ್ಧಾರನ ಹನುಮಂತ ದೇವನ — ರಾಗ: ಹಿಂದೂಸ್ಥಾನಿಕಾಪಿ, ಆದಿತಾಳ

ದೀನೋದ್ಧಾರನ ಹನುಮಂತ ದೇವನ॥ಪ॥ ಜ್ಞಾನಾಂತರಂಗನ ಧ್ಯಾನಿಸುವೆನು ನಾನು॥ಅ.ಪ॥ ಮುನಿಜನ ಸೇವ್ಯನ ಮಹನೀಯ ಸ್ವಾಮಿಯ। ಕಪಿಕುಲ ಮಾಣಿಕ್ಯನ ಧ್ಯಾನಿಸುವೆನು ನಾನು॥1॥ ಮಹಾ ಮಹೇಶನ ಮಹಿಮಾ ಪರೇಶನ। ಸತ್ಯರೂಪನ ಧ್ಯಾನಿಸುವೆನು ನಾನು॥2॥ ಹರಿಯ ಭಕುತನ ವರತಾಳ್ಯದ್ಧನುಮನ। ಪರಾತ್ಪರ ಮಹಿಮನ ಧ್ಯಾನಿಸುವೆನು ನಾನು॥3॥

### ಪವನ ಕುಮಾರನೆ ಪೊರೆಯೊ — ರಾಗ: ಹಿಂದೋಳ, ಆದಿತಾಳ

ಪವನ ಕುಮಾರನೆ ಪೊರೆಯೊ ಎಮ್ಮನು। ಪಾವನ ಚರಿತನೆ ಪಾಪ ವಿಮೋಚನೆ॥ಪ॥ ಅಂಜನಿ ಪುತ್ರನೆ ನಿನ್ನನೆ ನಂಬಿದೆ। ಆಂಜನೇಯನೆ ಎಮ್ಮನು ಕೈಬಿಡದೆ। ಪಾಲಿಸು ಎಮ್ಮನು ಭಕ್ತರ ನಿಧಿಯೆ। ರಕ್ಷಿಸು ರಕ್ಷಿಸು ರಕ್ಷಿಸು ಹನುಮನೆ॥1॥ ವಾಲಿಸುಗ್ರೀವರ ಯುದ್ಧದಲಿನು। ರಾಮನು ವಾಲಿಯನೆ ಕೊಂದು ಸುಗ್ರೀವಗೆ ಪಟ್ಟಕಟ್ಟಿ। ಆ ಸಮಯದಲಿ ನೀನು ರಾಮನಿಗೆ ಭಂಟನಾದೆ। ಸೀತೆಯ ಶೋಧನೆಗೆ ಸಲಹೆಯನಿತ್ತೆ॥2॥ ಲಂಕಾ ಪಟ್ಟಣದಿ ಲಂಕಿಣಿಯನೆ ಕೊಂದೆ। ರಾವಣನ ಸಭೆಯಲಿ ಬಾಲಸುತ್ತಿ ಮೇಲ್ಕುಳಿತೆ। ಬಾಲಕೆ ಜ್ವಾಲೆ ಕಾಣಲು ಕೆರಳಿದೆ ಹನುಮನೆ। ಲಂಕೆಯ ದಹಿಸಿ ನೀ ಕುಕ್ಕೆಸ್ವಾಮಿಯಲಿ ರಾಮನ ಕಂಡರುಹಿದೆ॥3॥

### ಯೋಗ್ಯ ಯೋಗಿರಾಜ ಹನುಮ — ರಾಗ: ಮಾಂಡ್,ಆದಿ

ಯೋಗ್ಯ ಯೋಗಿರಾಜ ಹನುಮ। ಭಾಗ್ಯದ ಬಾಗಿಲು ತೆರೆಯೊ ಹನುಮ॥ಪ॥ ರಾಮನ ದರ್ಶನ ಮಾಡಿಸೋ ಹನುಮ। ಕಾಮನ ಗೆಲಿದ ಸಂಯಮಿ ಹನುಮ॥ಅ.ಪ॥ ಪವನ ಪುತ್ರ ಧೀರ ಹನುಮ। ಅವನಿಜೆದುಃಖ ಸರಿಸಿದ ಹನುಮ। ಅವನಿಯೊಳ್ ಪೂಜೆಗೊಂಬ ಹನುಮ। ನವರಸ ಭಕ್ತಿಯುತ ಶ್ರೀಹನುಮ॥1॥ ಉದಧಿಯ ಲಂಘಿಸಿದ ಶೂರಹನುಮ। ಮದಮೇಘನಾದನ ಮಡುಹಿದ ಹನುಮ। ಸದಮಲದೇವಿ ಸೇವಕ ಹನುಮ। ಶ್ರೀದ ರಾಮನಾಜ್ಞಾಧಾರಕ ಹನುಮ॥2॥

### ರವಿಕುಲಾಂಬುಧಿ ಸೋಮನೇ — ರಾಗ:ಶಂಕರಾಭರಣ

ರವಿಕುಲಾಂಬುಧಿ ಸೋಮನೇ। ಭುವನಪಾಲನ ರಾಮನೇ ಕಪಿವಾರಾರ್ಚಿತ ಭೂಮನೇ। ದಿವಿಜಸನ್ನುತ ರಾಮನೇ॥ಪ॥ ಕಂಡೇನು ದೇವಿಯ ಲಂಕೆಯಲೀ। ಭಂಡಾರಾವಣನ। ವನಾದೊಳೂ ಚಂಡಾರಾಕ್ಷಸಿಯಾರ। ಮಧ್ಯಾದೊಳಿರುವಳು। ಚಂದ್ರಾಮಂಡಿಸಿರುವಳೂ॥1॥ ಸುಂದಾರಿ ನಿನ್ನನೂ ಧ್ಯಾನಿಪಳೂ। ಕಂದುತ್ತ ಚಿತ್ತಾದಿ ಶೋಕಿಪಳೂ। ಮಂದಮಂದವಾಗಿ ಕಣ್ಣೀರ ಬಿಡುವಳೂ। ಬಂಧಾನದೊಳಿರುವಳೂ॥2॥ ಮಾಸೀದಸೀರೆಯ ನುಟ್ಟಿಹಳೂ। ಭೂಸುರ ವೇಣಿಯ ತೊಟ್ಟಿಹಳೂ। ಭೂಷಾವಿಶೇಷಾದಿ ಆಸೆಯ ನೀಡುವಳೂ। ಉಪವಾಸಾವನೆ ಗೈವಳೂ॥3॥ ಕಾಮಿನಿ ತಾಪವ ಹೊಂದಿಹಳೂ। ತಾಮರಾಸಾಕ್ಷಿಯು ನೊಂದಿಹಳೂ। ಬಾಮೆಯು ಶ್ರೀರಾಮ ಭಾವದೊಳಿರುವಾಳು। ರಾಮರಾಮೆನ್ನುವಳೂ॥4॥ ಮಾನೂನಿ ಯೋಗೀನೀಯಾಗೀಹಳೂ। ಜ್ಞಾನವಿಜ್ಞಾನವ ಪೊಂದೀಹಳೂ। ಜಾನಕಿ ಪತಿಭಕ್ತಿ ದೇವಿಯಾಗಿ ರುವಳೂ। ಧೇನುಪುರಾ ಶಾಖ್ಯೋಳು॥5॥

### ರಾಮನ ಬಂಟ ಹನುಮಂತ — ರಾಗ: ಮೋಹನ, ಆದಿತಾಳ

ರಾಮನ ಬಂಟ ಹನುಮಂತ। ಜಗವನೆ ಜಯಿಸುವ ಬಲವಂತ। ಏಳು ಸಮುದ್ರವ ದಾಟುತ್ತಾ। ತೆರಳಿದ ಲಂಕೆಗೆ ಹಾರುತ್ತಾ॥1॥ ದ್ವಾರವ ಕಾಯುವ ಲಂಕಿಣಿಯ। ಲಕ್ಷ್ಯವ ಮಾಡದೆ ನುಗ್ಗುತ್ತಾ। ಸಾಗಿದ ಅಂತಃಪುರ ದತ್ತಾ।

ಸೀತಾಮಾತೆಯ ಹುಡುಕುತ್ತಾ।।2। ಮಂಡೋದರಿಯನು ನೋಡುತ್ತಾ। ಸೀತಾ ಮಾತೆ ಎಂದು ಭ್ರಮಿಸುತ್ತಾ। ಮತ್ತೇ ಯೋಚನೆ ಮಾಡುತ್ತಾ। ನಡೆದನು ಅಶೋಕ ವನದತ್ತಾ।।3।। ಸೀತಾಮಾತೆಯ ಕಾಣುತ್ತಾ। ಕರಗಳ ಜೋಡಿಸಿ ನಮಿಸುತ್ತಾ। ರಾಮನ ಉಂಗುರ ಸಲಿಸುತ್ತಾ। ರಾಮನ ಮಹಿಮೆಯ ಪೊಗಳುತ್ತಾ।।4।। ಚೂಡಾಮಣಿಯನು ಪಡೆಯುತ್ತಾ। ಅಗ್ನಿಲಿ ಲಂಕೆಯ ದಹಿಸುತ್ತಾ। ಬಾಲವ ಸಾಗರದಿ ಅದ್ದುತ್ತಾ। ಮರಳಿದ ರಾಮನ ಪಾದದತ್ತಾ।।5।। ರಾಮನ ಪಾದಕೆ ನಮಿಸುತ್ತಾ। ಚೂಡಾಮಣಿಯನು ಸಲ್ಲಿಸುತ್ತಾ। ಸೀತಾ ಮಾತನು ತಿಳಿಸುತ್ತಾ। ಯುದ್ಧಕ್ಕೆ ಸನ್ನಾಹ ಮಾಡುತ್ತಾ।।6।। ಸಾಗರಕೆ ಸೇತುವೆ ಕಟ್ಟುತ್ತಾ। ರಾಮನ ಸಂಗಡ ಘರ್ಜಿಸುತ್ತಾ। ಸೈನ್ಯವು ಹೊರಟಿತು ಲಂಕೆಯತ್ತಾ। ಬಿದ್ದಿತು ರಾವಣ ಪಡೆಯತ್ತಾ।।7।। ಸೀತಾಮಾತೆಯ ಹೊಂದುತ್ತಾ। ಮರಳಿದರಯೋಧ್ಯಾಪುರದತ್ತಾ। ಪಟ್ಟಾಭಿಷೇಕವ ನೋಡುತ್ತಾ। ಮನದಲಿ ಹರುಷದಿ ನಲಿಯುತ್ತಾ।।8।। ಆನಂದ ಸಾಗರದಿ ಮುಳುಗುತ್ತಾ। ಶಾರದಾ ದಾಸಿ ವಂದಿತಾ। ಭಕ್ತಿಯ ಜಗಕೆಲ್ಲಾ ತೋರುತ್ತಾ। ಭಕ್ತ ಜನಗಳನು ಕಾಯುತ್ತಾ।।9।।

**ರಾಮನಾಮಮೆ ಸೊನ್ನಾಲ್ (ತಮಿಳು)** **ರಾಗ: ಕಾಪಿ**

ರಾಮನಾಮಮೆ ಸೊನ್ನಾಲ್। ಅಂಗೇ ವರುವಾನ್ ಹನುಮಾನ್। ತೇವೈಗಳೈ ಯಾವೆಯುಂ ತರುವಾನ್। ಶ್ರೀರಾಮಭಕ್ತ ಹನುಮಾನ್।।ಪ।। ಲಂಕೆಯೆ ವಾಲಾಲ್ ಎರಿತ್ತವನ್। ಅಂದ ಲಂಕಾಧಿಪನೈ ಎದಿತ್ತವನ್।। ಅಂಜನೆ ಸುತನವನಾಮ್। ಶ್ರೀರಾಮಭಕ್ತ ಹನುಮಾನ್।।1।। ಸಂಜೀವಿನಿ ಮಲೆಯೈ ಕೊಂಡುವಂದವನ್। ಚಿರಂಜೀವಿ ಎನ್ರು ಪೆಯರ್ ಪೆಟ್ರವನ್।। ಶ್ರೀರಾಮಭಕ್ತ ಹನುಮಾನ್। ಅಂಜನೆ ಸುತನವನಾಮ್।।2।।

**ವಡೆಮಾಲೆ ಹಾಕುವೆ ಆಂಜನೇಯ** **ರಾಗ: ಶಂಕರಾಭರಣ, ಏಕತ್ರಿಶ**

ವಡೆಮಾಲೆ ಹಾಕುವೆ ಆಂಜನೇಯ। ಅಡೆತಡೆಗಳ ದೂರ ಮಾಡು ಪವನ ನಂದನ।।ಪ।। ವೀಳ್ಯೆದೆಲೆ ಹಾರ ಹಾಕುವೆ ಮಾರುತಿರಾಯ। ಒಳ್ಳೆ ಮನಸು ನಮಗೆ ಕೊಡು ಸೂರ್ಯತೇಜನೆ।।1।। ಬೆಣ್ಣೆ ಸೇವೆ ಮಾಡುವೆ ಆಂಜನೇಯ। ಬೆಣ್ಣೆಯಂತೆ ಮನಸು ಕೊಡು ರಾಮದೂತನೆ।।2।। ಪಾರಿಜಾತ ಪುಷ್ಪಾರ್ಚನೆ ನಿನಗೆ ಮಾಡುವೆ। ಪಾರುಗಾಣಿಸಯ್ಯ ನಮ್ಮ ಕಷ್ಟಗಳೆಲ್ಲ।।3।। ಕ್ಷೀರಾಭಿಷೇಕ ನಿನಗೆ ಮಾಡಿಸುವೆನು। ಪೂರ್ಣಗೊಳಿಸು ನಮ್ಮಯ ಆಸೆಗಳನು।।4।। ಪೂರ್ಣಫಲ ಅರ್ಪಿಸುವೆ ಆಂಜನೇಯ। ಕಾರ್ಯಸಿದ್ಧಿ ಮಾಡೆಮಗೆ ಸಚ್ಚಿದಾನಂದನೇ।।5।।

**ಹನುಮನೇ ತಂದೆಯು** **ರಾಗ: ಕಾನಡ**

ಹನುಮನೇ ತಂದೆಯು ಹನುಮನೇ ತಾಯಿಯು ಹನುಮನೇ ಸಕಲವು ಜಗಕೆಲ್ಲ।।ಪ।। ವೀರಾಧಿವೀರ ನಮ್ಮ ಹನುಮಂತ ಶೂರಾಧಿಶೂರ ನಮ್ಮ ಹನುಮಂತ।।ಅ.ಪ.।। ಸೂರ್ಯನ ಕಂಡು ಹಣ್ಣು ಎಂದು ಗಗನಕೆ ಹಾರಿದ ಹನುಮಂತ।।1।। ಯಾರೂ ಹಾರದ ಉಗ್ರ ಸಮುದ್ರವ ಹಾರಿ ಬಂದವ ಹನುಮಂತ।।2।। ಲಕ್ಷ್ಮಣ ದೇವನ ಪ್ರಾಣವ ಉಳಿಸಲು ಬೆಟ್ಟವನೆ ಹೊತ್ತು ತಂದ ಹನುಮಂತ।।3।।

**ಹನುಮಂತ ದೇವ ದಯೆತೋರೋ** **ರಾಗ: ಮೋಹನ, ಆದಿತಾಳ**

ಹನುಮಂತ ದೇವ ದಯೆತೋರೋ ಸ್ವಾಮಿ। ದಯವಿಲ್ಲವೇನೋ ದಾಸನ ಮೇಲೆ।।ಪ।। ರಾಮಧ್ಯಾನವ ಮಾಡುತ ಮರೆತೆಯೊ। ನಾನಿನ್ನ ಧ್ಯಾನವ ಮರೆಯದೆ ಮಾಡುವೆ। ಅರಿತು ಅರಿಯದೆ ಮಾಡಿದ ತಪ್ಪನು। ಮನ್ನಿಸಬೇಕೆಂದು ಬೇಡುವೆನಯ್ಯಾ।।1।। ನಿನ್ನ ಮಹಿಮೆಯು ನಿನಗರಿವಾಗದೊ। ರಾಮಧ್ಯಾನದೊಳ್ ನಿನಗಾನಂದವೊ। ಆನಂದ ಮೂರುತಿ ಆನಂದದಿಂದಲಿ। ಆನಂದ ನೀಡಯ್ಯ ಹನುಮಂತರಾಯ।।2।।

## ಭಜನೆ

**ಅಂಜನ ನಂದನ ನಮೋ ನಮೋ** **ರಾಗ: ಪುನ್ನಾಗವರಾಳಿ**

ಅಂಜನ ನಂದನ ನಮೋ ನಮೋ। ಪವನ ತನಯ ನಮೋ ನಮೋ। ಪತಿತ ಪಾವನ ನಮೋ ನಮೋ॥ ಆಂಜನೇಯ ನಮೋ ನಮೋ॥1॥ ರಾಮದೂತ ನಮೋ ನಮೋ। ರಮ್ಯಚರಿತ ನಮೋ ನಮೋ। ಕಾಮದುಃಖ ಕಲುಷ ನಮೋ ನಮೋ। ವಿಘ್ನ ನಾಶಕಾಯ ನಮೋ ನಮೋ॥2॥ ಜ್ಞಾನದಾತ ನಮೋ ನಮೋ। ಜ್ಞಾನಸಿಂಧು ನಮೋ ನಮೋ। ಸಂಗೀತ ಶಾಸ್ತ್ರ ನಿಪುಣ ನಮೋ ನಮೋ। ಶಂಕರಾಂಶ ನಮೋ ನಮೋ॥3॥ ಬುದ್ಧಿದಾತ ನಮೋ ನಮೋ। ಯಶೋದಾತ ನಮೋ ನಮೋ। ಶಕ್ತಿದಾತ ನಮೋ ನಮೋ। ಶೌರ್ಯದಾತ ನಮೋ ನಮೋ॥4॥

**ಜೈ ಹನುಮ ಜಯ ಹನುಮ** **ರಾಗ: ಅಭೇರಿ**

ಜೈ ಹನುಮ ಜಯ ಹನುಮ। ಮಾರುತಿ ರಾಯ ಜಯ ಹನುಮ। ಅಂಜನ ಪುತ್ರ ಜಯ ಹನುಮ। ಅತಿಬಲವಂತ ಜಯ ಹನುಮ। ಶ್ರೀರಾಮ ಭಕ್ತ ಜಯ ಹನುಮ। ಶ್ರೀರಾಮ ದೂತ ಜಯ ಹನುಮ॥

**ವಂದೇ ಸಂತಂ ಶ್ರೀಹನುಮಂತಂ** **ರಾಗ: ಅಭೇರಿ**

ವಂದೇ ಸಂತಂ ಶ್ರೀ ಹನುಮಂತಂ। ರಾಮದಾಸಮಮಲಂ ಬಲವಂತಂ॥ಪ॥ ರಾಮ ಕಥಾಮೃತ ಮಧುನಿ ಪಿಬಂತಂ। ಪರಮಪ್ರೇಮಭರೇಣ ನಟಂತಂ॥1॥ ಸರ್ವಂ ರಾಮಮಯಂ ಪಶ್ಯಂತಂ। ರಾಮ ರಾಮ ಇತಿ ಸದಾ ಜಪಂತಂ॥2॥ ಪ್ರೇಮರುದ್ಧಗಳಂ ಅಶ್ರುವಹಂತಂ ಪುಳಕಾಂಕಿತ ವಪಷಾ ವಿಲಸಂತಂ॥3॥ ಕದಾಚಿದಾನಂದೇನ ಹಸಂತಂ ಕ್ವಚಿತ್ ಕದಾಚಿದಪಿ ಪ್ರರುದಂತಂ॥4॥ ಸದ್ಭಕ್ತಿ ಪಂಥಂ ಸಮುಪದಿಶಂತಂ ವಿಠ್ಠಲಪಂಥಂ ಪ್ರತಿಸುಖಯಂತಂ॥5॥

**ಹೇ ರಾಮದೂತ ಹೇ ರಾಮ ಭಕ್ತ** **ರಾಗ: ಮೋಹನ**

ಹೇ ರಾಮದೂತ ಹೇ ರಾಮ ಭಕ್ತ ಹೇರಾಮದಾಸ ನಮೋ ನಮೋ। ಸೀತಾಮಾತಾ ಶೋಕವಿನಾಶಕ ಅನಂತನಾಥ ನಮೋ ನಮೋ॥ ಮಾರುತಿ ರಾಯ ಮಹಾನುಭಾವ ಆದಿಬಲವಂತ ನಮೋ ನಮೋ। ಆಂಜನೇಯ ನಮೋ ನಮೋ॥

## ಸಂಪ್ರದಾಯ

**ಪವನ ತನುಜನು ಚೂಡಾರತ್ನವ** **ರಾಗ: ಕಾನಡಾ, ಮಿಶ್ರಛಾಪುತಾಳ**

ಪವನ ತನುಜನು ಚೂಡಾರತ್ನವ। ಅಂಬುಜಾಕ್ಷಿಗೆ ಇತ್ತನೇ। ಸಮರಕನುಕೂಲವೆಂಬೊ ರಾಮರ। ಸುಗ್ರೀವಗೆ ಕಾಣೆಸಿದನೇ॥ಪ॥ ಕಮಲನಾಭನ ಆಜ್ಞೆಯಿಂದಲೆ। ಕಪಿಬಲವ ಕೂಡಿಸಿದನೇ। ಸವರಿದಾ ಸೈನ್ಯವನೆಲ್ಲಾ। ಸಂಜೀವನ ತಂದೆಬ್ಬಿಸಿದಿ। ಕಲಿಭೀಮಾ ಭಲಾರೆ ನಿಸ್ಸೀಮ। ಭೀಮಾ ಬಾ ಹಸೆಗೇ ಕರೆದಾರು॥1॥ ಅಂಜನಿಯ ಸುಕುಮಾರನಾ ಪ್ರತಿ। ಮಹಿಮೆ ರಾಮರ ದೂತನೇ। ಅಂಜದುದಧಿಯ ದಾಟಿ ಅಸುರರ। ವನವನೆಲ್ಲಾ ಕಿತ್ತನೇ। ರಂಜಿಸುವ ಆ ನಗರವನೆ ಸುಟ್ಟು। ರಾಜಕಾರ್ಯವ ಮಾಡಿಸಿದ। ಕಲಿಭೀಮಾ। ಭಲಾರೆ ನಿಸ್ಸೀಮ। ಭೀಮ ಬಾ ಹಸೆಗೇ। ಕರೆದಾರು॥2॥ ತೋರ ತ್ರಿಪುಂಡ್ರವು ಕರ್ಣಕುಂಡಲ। ಚಾರುಯಜ್ಞ ಪವಿತ್ರನೇ। ಹಾರ ಕಂಠೀಪದಕ ರಾಣಿಯಿಂ। ಪಡೆದ ಬಹು ಪ್ರಖ್ಯಾತನೇ। ತೋರ ಮಾಣಿಕ್ಯ ಅಳವೇ ಎನುತ। ರಂಗನಾ ನಿಜದಾಸನೋ। ಕಲಿಭೀಮಾ ಭಲಾರೆ ನಿಸ್ಸೀಮಾ। ಭೀಮ ಬಾ ಹಸೆಗೇ ಕರೆದಾರು॥3॥

## ಆರತಿ

### ಆರತಿ ಕೀ ಜೇ ಹನುಮಾನ್ (ಹಿಂದಿ) ರಾಗ: ಕುರಂಜಿ

ಆರತಿ ಕೀ ಜೇ ಹನುಮಾನ್ ಲಲಾಕೀ। ದುಷ್ಟದಲನ್ ರಘುನಾಥ್ ಕಲಾಕೀ।ಜಾಕೆ ಬಲ್ ಸೇ ಗಿರಿವಟ್ ಕಾಂಪೇ। ರೋಗ ದೋಷ್ ಜಾಕೇ ನಿಕಟ ನ ಝಾಂಕೇ।।1।। ಅಂಜನಿ ಪುತ್ರ್ ಮಹಾ ಬಲದಾಯೀ। ಸಂತನ್ ಕೇ ಪ್ರಭು ಸದಾ ಸಹಾಯೀ। ದೇ ಬೀಡಾ ರಘುನಾಥ್ ಪಠಾಯೇ। ಲಂಕಾ ಜಾಯ್ ಸಿಯಾ ಸುಧೀ ಲಾಯೇ।।2।। ಲಂಕಾಸೋ ಕೋಟ್ ಸಮುದ್ರ ಸಿಖಾಯೀ। ಜಾತ್ ಪವನಸುತ್ ಬಾರ್ ನಲಾಯೀ। ಲಂಕಾ ಜಾರಿ ಅಸುರ್ ಸಂಹಾರೇ। ಸೀತಾರಾಮ ಜೀ ಕೇ ಕಾಜ್ ಸಂವಾರೇ।।3।। ಲಕ್ಷ್ಮಣ ಮೂರ್ಛಿತ್ ಪಡೇ ಧರ್ತಿ ಪರ್। ಆನಿ ಸಂಜೀವನ್ ಪ್ರಾಣ್ ಉಬಾರೇ। ಪೈಠಿ ಪಾತಾಲ್ ತೊರಿ ಜಮ್ - ಕಾರೇ। ಅಹಿರಾವಣ್ ಕೀ ಭುಜಾ ಉಖಾರೇ।।4।। ಬಾಯೇಂ ಭುಜ ಅಸುರ್ ದಲ್ ಮಾರೇ। ದಾಹಿನೇ ಭುಜಾ ಸಂತ್‌ಜನ್ ತಾರೇ। ಸುರ್-ನರ್-ಮುನಿಜನ್ ಆರತೀ ಉತಾರೇಂ। ಜಯ್- ಜಯ್ ಜಯ್ ಹನುಮಾನ್ ಉಬಾರೇ।।5।। ಕಂಚನ್ ಥಾಲ್ ಕಪೂರ್ ಕೀ ಬಾತೀ। ಆರತೀ ಕರತ್ ಅಂಜನಾ ಮಾಯೀ। ಜೋ ಹನುಮಾನ್ ಜೀ ಕೀ ಆರತೀ ಗಾವ್ಯೆ। ಬಸಿ ವೈಕುಂಠ್ ಪರಮ್ ಪದ್ ಪಾವೇ।।6।।

### ಆರತಿ ಬೆಳಗುವೆನು ಮಾರುತಿರಾಯನಿಗೆ ರಾಗ: ಮಾಂಡ್

ಆರತಿ ಬೆಳಗುವೆನು। ಮಾರುತಿರಾಯನಿಗೆ।।ಪ।। ಅಂಜನಿ ಪುತ್ರನಿಗೇ। ಮಂಜುಳಗಾತ್ರನಿಗೇ। ಸಂಜೀವನವ ತಂದ ರಂಜಿಪ ದೇವನಿಗೆ।।1।। ಕುಂತಿಯ ಜಾತನಿಗೆ। ಪಂಥವ ಗೆಲಿದವಗೆ। ಶಾಂತೇಶ ಬಲಭೀಮ। ಚಿಂತಾಮಣಿ ಧನಿಗೆ।।2।। ಶ್ರೀಮುನಿರಾಯನಿಗೆ। ಮಹಿಮಾನಂದನಿಗೆ। ಕಾಮಿತಫಲವೀವ ಸ್ವಾಮಿ ಹನುಮ ದೊರೆಗೇ।।3।।

### ಆರತಿ ಮಾಡುವೆ ಮಾರುತಿಗೆ ರಾಗ: ಬೇಹಾಗ್

ಆರತಿ ಮಾಡುವೆ ಮಾರುತಿಗೆ। ಧೀರ ಶ್ರೀರಾಮನ ಸಾರಥಿಗೆ।।ಪ।। ಹೊಟ್ಟೆಗೆ ಹಣ್ಣನು ಕೀಳುತಲಿ। ಥಟ್ಟನೆ ಮರಗಳ ಮುರಿಯುತಲಿ। ದುಷ್ಟ ರಕ್ಕಸರ ಸೀಳುತಲಿ। ಸುಟ್ಟನು ವನವನು ಕೋಪದಲಿ।।1।। ಲಂಘಿಸಿ ಲಂಕೆಯ ದಾಟುತಲಿ। ಸೀತೆಗೆ ಉಂಗುರ ತೋರುತಲಿ। ಬೆಂಕಿಪುರಾವೆನುತಲಿ। ಆ ಮಹಾ ಲಂಕೆ ದಾಟುತಲಿ।।2।। ರಾಮರ ಸುದ್ದಿಯ ಕೇಳುತಲಿ। ಪ್ರೇಮದಿ ಸೇತುವೆ ಕಟ್ಟುತಲಿ। ಬೆಂಕಿಪುರಾವೆನುತಲಿ। ತಾರಕ ಮಂತ್ರವ ಜಪಿಸುತಲಿ।।3।।

### ಆರತಿಯ ಮಾಡಿ ಶ್ರೀರಾಮರಪಾದವನ್ನೇ ರಾಗ: ಕಾಂಬೋಧಿ

ಆರುತಿಯ ಮಾಡಿ ಶ್ರೀರಾಮರಪಾದವನ್ನೇ ನೋಡಿ।।ಪ।। ತೋರಿ ಲಂಕೆಗ್ಹಾರಿ। ಬಿಗಿದ ಪಟ್ಟಾಲಂಕೆಗ್ಹಾರಿ। ಕಾಯ್ದ ನೀರೊಳುಹಾರಿ। ಅಲ್ಲಿದ್ದ ಜನರೊಳು ಮಾತಾಡಿ।। ವನದೊಳಗಿದ್ದಳು। ಒಬ್ಬಳು ನಾರಿ। ಶ್ರೀರಾಮರ ಗುರುತು। ತಂದೆ ನಾ ತೋರಿ।।1।। ಏಕೆ ಬಂದೆ ನೀನು। ಶ್ರೀರಾಮರ ಗುರುತು ತಂದೆ ನಾನು। ಯಾರ ಮಗನು ನೀನು। ಶ್ರೀರಾಮರ ಬಾಲಹನುಮನಾನು।।2।। ಹಸಿವಾಗಿದೆ ತಾಯೆ। ಫಲಹಾರಕೇನು। ದೂರದಲ್ಲಿದ್ದ ಹಣ್ಣನ್ನು ಮೆಲ್ಲುವೆನು ನಾನು।।3।। ರಾಮ ಲಕ್ಷ್ಮಣರು ಪೋಗಿಸಂತೋಷದಿ ಮುದ್ದಾಡಿ। ಶ್ರೀರಾಮ ರಿದ್ದಲ್ಲಿ ಸೀತೆಯು ಪೋಗಿ। ವಿಭೀಷಣನಿಗೆ ಪಟ್ಟವಾಯಿತು ಕೇಳಿ।।4।।

## ಲಾಲಿ

### ತೂಗುವೆ ಸ್ವಾಮಿಯ ತೂಗುವೆ ಹನುಮನ್ನ ರಾಗ: ಬೇಹಾಗ್

ತೂಗುವೆ ಸ್ವಾಮಿಯ ತೂಗುವೆ ಹನುಮನ್ನ ತೂಗಿ ಪೂಜೆ ಮಾಡುವೆ।।ಪ।। ವಾಯುದೇವನ ಕಂದ ಹನುಮರಾಯನಾ। ವಾರಿಧಿಯ ತಾ ನೆಗೆದ ಮಾರುತಿಯಾ। ಲಂಕೆಯಲಿ ಸೀತೆಯನು ನೋಡಿದವನಾ। ಶ್ರೀರಾಮ ಮುದ್ರಿಕೆಯನ್ನು

ನೀಡಿದವನಾ॥1॥ ರಕ್ಕಸರ ಕುಲವನ್ನು ಕೊಂದವನಾ। ಛಲದಿಂದ ಲಂಕೆಯನು ದಹಿಸಿದವನಾ। ರಘುಪತಿಗೆ ಮಣಿಯನ್ನು ಇತ್ತವನಾ। ಶ್ರೀರಾಮನ ಜಯಕೆ ಕಾರಣನಾದವನಾ॥2॥ ಲಕ್ಷ್ಮಣನ ಪ್ರಾಣ ಉಳಿಸಿದವನಾ। ನಿತ್ಯ ಪ್ರಭು ಸೇವೆಯಲಿ ನಿಂತವನಾ। ನಾವೆಲ್ಲ ನೆನೆಯುವ ಮಾರುತಿಯಾ। ನಮ್ಮೆಲ್ಲರ ತಾಳ್ಮೆದ್ಧನುಮಂತನಾ॥3॥

**ಲಾಲಿ ತ್ರಿಭುವನ ಪಾವನ** **ರಾಗ: ಕುರಂಜಿ**

ಲಾಲಿ ತ್ರಿಭುವನ ಪಾವನ ಲಾಲಿ॥ಪ॥ ಅಂಜನಾ ದೇವಿಯ ಕಂದಗೆ ಲಾಲಿ। ಕಂಜಾಕ್ಷಿಗೆ ಮುದ್ರಿಕೆಯಿತ್ತವಗೆ ಲಾಲಿ। ಅಂಜದೆ ಅಸುರರ ಕೊಂದಗೆ ಲಾಲಿ। ಸಂಜೀವನಗಿರಿ ತಂದಗೆ ಲಾಲಿ॥1॥ ಕುಂತಿಯುದರದಿ ಬಂದಗೆ ಲಾಲಿ। ದಂತಿಯ ಗಗನಕ್ಕೆ ಬಗೆದಗೆ ಲಾಲಿ। ಭ್ರಾಂತನ ಉದರವ ಬಗೆದಗೆ ಲಾಲಿ। ಚಿಂತಾಮಣಿ ಭೀಮರಾಯಗೆ ಲಾಲಿ॥2॥ ಸೋಹಂ ಎಂಬರ ತರಿದಗೆ ಲಾಲಿ। ದಾಸೋಹಂ ಎಂಬರ ಪೊರೆದಗೆ ಲಾಲಿ। ಮೋಹನವಿಠಲನ್ನ ಭಜಿಪಗೆ ಲಾಲಿ। ಸ್ನೇಹದಿಭಕುತರ ಪೊರೆದಗೆ ಲಾಲಿ॥3॥

## ಮಂಗಳ

**ಕೇಸರಿ ತನಯಗೆ ಮಂಗಳ** **ರಾಗ: ಮಧ್ಯಮಾವತಿ, ಏಕತಾಳ**

ಕೇಸರಿ ತನಯಗೆ ಮಂಗಳ। ವಾನರೋತ್ತಮಗೆ ಮಂಗಳ॥ಪ॥ ರಾಮದೂತನಿಗೆ ಮಂಗಳ। ಸೀಮಾತೀತಗೆ ಮಂಗಳ। ವಜ್ರಕಾಯನಿಗೆ ಮಂಗಳ। ವಾಯುಪುತ್ರಗೆ ಮಂಗಳ॥1॥ ಭವ್ಯ ಮೂರುತಿಗೆ ಮಂಗಳ। ಬ್ರಹ್ಮ ತೇಜನಿಗೆ ಮಂಗಳ। ಭಕ್ತವತ್ಸಲಗೆ ಮಂಗಳ। ಭಜರಂಗ ಬಲಿಗೆ ಮಂಗಳ॥2॥ ದುಷ್ಟ ಶಿಕ್ಷಕಗೆ ಮಂಗಳ। ಶಿಷ್ಟ ರಕ್ಷಕಗೆ ಮಂಗಳ. ಸುಗ್ರೀವ ಸಖಗೆ ಮಂಗಳ। ಶಾರದೇನುತಗೆ ಮಂಗಳ॥3॥

# ಶ್ರೀಕೃಷ್ಣ ಸ್ತುತಿ

## ಕೃಷ್ಣನ ಬಾಲ್ಯ

## ದೇವರನಾಮ

**ಆನಂದಾಚ ಕಂದ ಹರಿಲಾ (ಮರಾಠಿ–ಅಭಂಗ)** **ರಾಗ: ಭೀಮಫಲಾಸ್**

ಆನಂದಾಚ ಕಂದ ಹರಿಲಾ ದೇವಕಿನಂದನ ಪಾಹಿಲಾ॥ ಭಕ್ತಸಾಠಿ ಠೇವುನ ಕರಕಟಿ ಭೀಮಾನಿಕಟೀ ರಾಹಿಲಾ॥ ಕಂಸಭಯಾನೇ ವಸುದೇವಾನೇ ನಂದಯಶೋದೆ ವಾಹಿಲಾ॥ ಯಜ್ಞಯಾಗ ಜಪ ತಪಾಸಿ ನ ಭೂಲೇ। ಧ್ಯಾನ ಧಾರಣೆ ನಾಕಲೇ। ನಿಶ್ಚಯ ಸಾಚ ಪರಿ ತುಕಾಯಾ ಚ ಭಕ್ತಿ ಗುಣಾಸೀ ಮೋಹಿಲಾ॥

**ಇವ ನೋಡಮ್ಮ ನವನೀತ ಚೋರ** **ರಾಗ: ಕಮಾಚ್**

ಇವ ನೋಡಮ್ಮ ನವನೀತ ಚೋರ। ದೇವದೇವಮಾ ಮನೋಹರ॥ಪ॥ ಗೋವನೀವ ಗೋಪಾಲ ಶ್ರೀಧರ। ಗೋವಿಸುವ ಇವ ದಾಮೋದರ॥ಅ.ಪ.॥ ಬೆಣ್ಣೆ ಮೊಸರು ಕದ್ದು ಒಯ್ವನ। ಕಣ್ಣಲ್ಲಿ ಕಟ್ಟಬೇಕು ಇವನ। ಪುಣ್ಯವುಳ್ಳ ಯಶೋದೆ ಕಂದನ। ಬಣ್ಣಿಸೊ ಮಹೀಪತಿ ಗನುದಿನ॥1॥

**ಎಲ್ಲಾಡಿ ಬಂದ್ಯೋ ನೀ** **ರಾಗ: ರೇವತಿ**

ಎಲ್ಲಾಡಿ ಬಂದ್ಯೋ ನೀ ಹೇಳಯ್ಯಾ। ನಿಲ್ಲು ನಿಲ್ಲು ಗೋಪಾಲ ಕೃಷ್ಣಯ್ಯ ॥ಪ॥ ನೊಸಲಲ್ಲಿ ಕಿರುಬೆವರು ಇಟ್ಟಿದೆ ಅಲ್ಲಿ।